CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

ಸಂಪುಟ ೧೩೮ | ಬೆಂಗಳೂರು, ಗುರುವಾರ, ಅಕ್ಟೋಬರ್ ೨೩, ೨೦೦೩ (ಕಾರ್ತಿಕ ೧, ಶಕ ವರ್ಷ ೧೯೨೫) | ಸಂಚಿಕೆ ೪೨

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಹಾವೇರಿ ತಾಲ್ಲೂಕು, ಹಾವೇರಿ ಜಿಲ್ಲೆ

**ಸಂಖ್ಯೆ: ತಾಸಕಅ-ಎಸ್-1-ಸಿಆರ್-7/ 2003-04/ 630, ದಿನಾಂಕ: 15ನೇ ಸೆಪ್ಟೆಂಬರ್ 2003**

**ವಿಷಯ:** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ-56, ಯೋಮಸ-02 (1), ದಿ: 18-7-2002.

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ, 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು. ಸದರಿ ಅಧಿನಿಯಮದ ರೀತ್ಯಾ, ಎಲ್ಲಾ ಸಾರ್ವಜನಿಕ ಪ್ರಾಧಿಕಾರಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2 (ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ, ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ, ತಾಲ್ಲೂಕು ಮಟ್ಟದ ಹಂತದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|
| ತಾಲ್ಲೂಕು ಮಟ್ಟದಲ್ಲಿ | ಕಛೇರಿ ಅಧೀಕ್ಷಕರು | ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು |

ಸರ್ಕಾರದ ಅಧಿನಿಯಮದ ಸೆಕ್ಷನ್ 3 (ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ, ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1) ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:-**

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯು ತಾಲ್ಲೂಕು ಪಂಚಾಯತ್‌ನ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಸದರಿ ಕಚೇರಿಯಲ್ಲಿ ಈ ಕೆಳಗಿನಂತೆ ಪೂರಕ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

| | | |
|---|---|---|
| 1) | ಕಚೇರಿ ಅಧೀಕ್ಷಕರು | 1 ಹುದ್ದೆ |
| 2) | ಪ್ರಥಮ ದರ್ಜೆ ಸಹಾಯಕರು | 1 ಹುದ್ದೆ |
| 3) | ದ್ವಿತೀಯ ದರ್ಜೆ ಸಹಾಯಕರು | 1 ಹುದ್ದೆ |
| 4) | ಬೆರಳಚ್ಚುಗಾರರು | 1 ಹುದ್ದೆ |
| 5) | ಗ್ರೂಪ್ ಡಿ ನೌಕರರು | 1 ಹುದ್ದೆ |

ಈ ಕಾರ್ಯಾಲಯದ ಅಧೀನದಲ್ಲಿ ಈ ಕೆಳಗಿನ ಸಂಸ್ಥೆಗಳು ಬರುತ್ತವೆ.

1. ಸರ್ಕಾರಿ ಸಾರ್ವಜನಿಕ ಮೆಟ್ರಿಕ್‌ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಹಾವೇರಿ.
2. ಸರ್ಕಾರಿ ಸಾರ್ವಜನಿಕ ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯ, ಹಾವೇರಿ.

3. ಸರ್ಕಾರಿ ಪರಿಶಿಷ್ಟ ವರ್ಗದ ಮೆಟ್ರಿಕ್‌ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಹಾವೇರಿ.
4. ಸರ್ಕಾರಿ ಮೆಟ್ರಿಕ್ ನಂತರದ ಗಂಡುಮಕ್ಕಳ ವಿದ್ಯಾರ್ಥಿ ನಿಲಯ, ಹಾವೇರಿ.
5. ಸರ್ಕಾರಿ ಮೆಟ್ರಿಕ್ ನಂತರದ ಹೆಣ್ಣುಮಕ್ಕಳ ವಿದ್ಯಾರ್ಥಿ ನಿಲಯ, ಹಾವೇರಿ.
6. ಸರ್ಕಾರಿ ಸಾರ್ವಜನಿಕ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಕಬ್ಬೂರ.
7. ಸರ್ಕಾರಿ ಸಾರ್ವಜನಿಕ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಹೊಸರಿತ್ತಿ.
8. ಸರ್ಕಾರಿ ವಸತಿ ಶಾಲೆ, ಹಾವೇರಿ.
9. ಸರ್ಕಾರಿ ಮಹಿಳಾ ಹೊಲಿಗೆ ತರಬೇತಿ ಕೇಂದ್ರ. ಹಾವೇರಿ.
10. ಮಹಿಳಾ ಕಲ್ಯಾಣ ಕೇಂದ್ರ, ನೆಗಳೂರು.

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ತಾಲ್ಲೂಕು ಮಟ್ಟದಲ್ಲಿ ಪ. ಜಾತಿ: ಪ. ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1. 18 ರಿಂದ 35 ವರ್ಷದೊಳಗಿನ ಮಹಿಳೆಯರಿಗೆ ಹೊಲಿಗೆ ತರಬೇತಿ
2. ಕಾನೂನು ಪದವೀಧರರಿಗೆ ಧನ ಸಹಾಯ
3. ನರ್ಸರಿ ಮತ್ತು ಮಹಿಳಾ ಕಲ್ಯಾಣ ಕೇಂದ್ರ
4. ಮೆಟ್ರಿಕ್ ನಂತರದ ಪ. ಜಾ: ಪ. ವ. ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ
5. ಪ್ರಥಮ ಯತ್ನದಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದ ಪ. ಜಾತಿ : ಪ. ವ. ವಿದ್ಯಾರ್ಥಿಗಳಿಗೆ ಬಹುಮಾನ ಹಣ ಎಸ್‌ಎಸ್‌ಎಲ್‌ಸಿ ವಿದ್ಯಾರ್ಥಿಗಳಿಗೆ.
6. ಪ. ಜಾ: ಪ. ವ. ವಿದ್ಯಾರ್ಥಿಗಳಿಗೆ ಶಿಷ್ಯವೇತನ
7. ಪ. ಜಾ: ಪ. ವ. ವಿದ್ಯಾರ್ಥಿಗಳಿಗೆ ಪ್ರತಿಭಾ ವಿದ್ಯಾರ್ಥಿ ವೇತನ
8. ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳು
9. ಕಾಲೇಜ್ ವಿದ್ಯಾರ್ಥಿ : ವಿದ್ಯಾರ್ಥಿನಿಯರಿಗೆ ಹಾಸ್ಟೆಲ್ ಸೌಲಭ್ಯ
10. 1 ರಿಂದ 5ನೇ ತರಗತಿ ವಿದ್ಯಾರ್ಥಿಗಳಿಗೆ ವಸತಿ ಶಾಲೆ ಸೌಲಭ್ಯ
11. ಕಾಲೇಜ್ ಹಾಸ್ಟೆಲ್ ವಿದ್ಯಾರ್ಥಿಗಳಿಗೆ ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಸಹಾಯ
12. ಅಸ್ವೈರ್ಮಲ್ಯ ವೃತ್ತಿಯಲ್ಲಿ ತೊಡಗಿರುವ ಪಾಲಕರ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ
13. ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ 1 ರಿಂದ 5ನೇ ತರಗತಿ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ
14. ಅಸ್ಪೃಶ್ಯತಾ ನಿವಾರಣೆ ಕಾರ್ಯಕ್ರಮಗಳ ಅನುಷ್ಠಾನ
15. ಜಾತಿ ಪರಿಶೀಲನೆ
16. ವಿಶೇಷ ಘಟಕ ಯೋಜನೆ ಕಾರ್ಯಕ್ರಮಗಳ ಅನುಷ್ಠಾನ
17. ಗಿರಿಜನ ಉಪಯೋಜನೆಯಡಿಯ ಕಾರ್ಯಕ್ರಮಗಳ ಅನುಷ್ಠಾನ
18. 6, 7ನೇ ತರಗತಿ ಪರಿಶಿಷ್ಟ ಜಾತಿ ಬಾಲಕಿಯರಿಗೆ ಪ್ರೋತ್ಸಾಹ ಶಿಷ್ಯವೇತನ
19. 8 ರಿಂದ 10ನೇ ತರಗತಿ ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಬಾಲಕಿಯರಿಗೆ ಪ್ರೋತ್ಸಾಹ ಶಿಷ್ಯವೇತನ
20. ಪ್ರಥಮ ಯತ್ನದಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾಗಿರುವ ಪ. ಜಾ: ಪ. ವ.ದ ಕಾಲೇಜ್ ವಿದ್ಯಾರ್ಥಿಗಳಿಗೆ ಬಹುಮಾನ ಹಣ.
21. ಅಂತರಜಾತಿ ವಿವಾಹವಾದ ದಂಪತಿಗಳಿಗೆ ಪ್ರೋತ್ಸಾಹಧನ.

**2. ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ.**

ಮೇಲೆ ವಿವರಿಸಿರುವಂತೆ, ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಎಲ್ಲಾ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ತಾಲ್ಲೂಕು ಮಟ್ಟದಲ್ಲಿ, ಸಂಬಂಧಿಸಿದ ತಾಲ್ಲೂಕು ಪಂಚಾಯತ್‌ನ ಕಾರ್ಯ ನಿರ್ವಹಣಾ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು:-**

**ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು:-** ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ನಿರ್ವಹಿಸುವ ಪ್ರತಿಯೊಂದು ಕರ್ತವ್ಯಗಳ ಬಗ್ಗೆ ಜಾಬ್ ಡಾಟ್ ಪ್ರತಿ ಲಗತ್ತಿಸಿದೆ.

**3. ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:-**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಆಯಾ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯ ನಿರ್ವಹಿಸುವರು. ಸಾರ್ವಜನಿಕರಿಂದ, ಮೇಲಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ, ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರುಸಹಿ ಮಾಡಿಸಿದ ನಂತರ, ಸದರಿ ಪತ್ರಗಳನ್ನು ನೋಂದಾಯಿಸಿ, ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈಪಿಡಿಯ ಪ್ರಕಾರ, ಕಡತವನ್ನು ಪ್ರಾರಂಭಿಸಿ, ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವುದು.

**3. ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು**

1. ಕಚೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ, ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2. ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.
3. ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಾಹಕರ ಮೇಜು ತಪಾಸಣೆ ಕಾರ್ಯ.
4. ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.
5. ಸರ್ಕಾರವು: ಮೇಲಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಪಾಲಿಸುವುದು.
6. ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

**4. ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:-**

1. ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು ಆದೇಶಗಳು, ವಾರ್ಷಿಕ ಸಂಕಲನ ಕ್ರಿಯಾ ಯೋಜನೆ ಹಾಗೂ ಕಿರುಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.
2. ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ, ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸಿರುವುದು.
3. ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ರೀತ್ಯಾ ರಾಜ್ಯಮಟ್ಟದಲ್ಲಿ, ಜಂಟಿ ನಿರ್ದೇಶಕರು (ವಿ. ನಿ. ಯೋ) ಯವರನ್ನು ಸಕ್ಷಮ ಪ್ರಾಧಿಕಾರವಾಗಿ ಹಾಗೂ ಸಮಾಜ ಕಲ್ಯಾಣ ಆಯುಕ್ತರವರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿ, ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳನ್ನು ಸಕ್ಷಮ ಪ್ರಾಧಿಕಾರವನ್ನಾಗಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್‌ರವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿಯೂ, ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.
4. ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂತಹ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು,
ಪಿ. ಆರ್. 1117 ಹಾವೇರಿ ತಾಲ್ಲೂಕು, ಹಾವೇರಿ ಜಿಲ್ಲೆ.

**IN COURT OF IInd A. C. M. M., BANGALORE CITY**
**NOTIFICATION**
**Dated: 26th SEPTEMBER 2003**

It is here by notified for the information of the general public that the under mentioned properties are seized and are in Police Custody of Thilakanagra Police Station Bangalore City, Any persons having lien over the properties may appear before this court and establish his lien over the property with in six months from the date this notification, failing which the under mentioned properties will be confisicated to the Government and disposed of according to Law.

**Note:**- List of properties sized at Thilakanagra Police Station are enclosed here with for kind perusal.

IInd Additional Chief Matropolitan Magistrate,
Bangalore.

**ತಿಲಕನಗರ ಪೊಲೀಸ್ ಠಾಣೆಯಲ್ಲಿ ವಾರಸುದಾರರಿಲ್ಲದ ಮಾಲುಗಳನ್ನು ಅಮಾನತ್ತುಪಡಿಸಿರುವ ಬಗ್ಗೆ ವಿವರ**

| ಕ್ರ.ಸಂ | ಮೊ.ಸಂ | ಪಿ.ಎಫ್.ನಂ | ಅಮಾನತ್ತುಪಡಿಸಿದ ಮಾಲುಗಳ ವಿವರ |
|---|---|---|---|
| 1. | 54/99 | 26/99 | 1. ಒಂದು ಲಾರಿ ನಂ. KA-04-1110, E-No. 143998, CH. No- 264279 |
| 2. | 890/01 | 175/01 | 1. ಒಂದು ಯಮಹ M/C, CTV-353, E-No-ILI, 125879, CH. No.-ILI-125879<br>2. K. BAJAJ M/C. No. KA-03-V 3921, E-No. - DBMBDG-29482, CH. No- DBFBDG-24911<br>3. B/ CHETAK S/C KA-02-1-6037, E.No-06 M94 JO 3847, CH. No-06F941-21396<br>4. BAJAJ 150 S/C MEQ-668, E.No-E 321-118813. CH.No. 030312-118038<br>5. BAJAJ S/C CAV-331, E. No- S 400119441, CH. No- 22022218354 |
| 3. | 892/01 | 176/01 | 1. ಒಂದು S/C No. PJU- 3956. E-No.-03E 1662128.<br>2. ಹಿರೋ ಪುಚ್ M/C KA-03-4-5802, E. NO. CA96241, CH. No-EA 95700<br>3. ಒಂದು RAJDOOT-CAJ-9702, E. No- 111-5557124, CH. No. C-11B09577<br>4. ಒಂದು ಯಮಹ ನಂ. ಇಲ್ಲಾ ENG No.- IBO 68225, CH. No. 1010-68225 |

| | | | |
|---|---|---|---|
| 4. | 28/02 | 4/02 | 1. ಒಂದು TVS 50 XL No. KA 02 V-5921, E. No-ಇಲ್ಲಾ, CH. No. 1710FT-57650 |
| 5. | 30/02 | 5/02 | 1. ಮಾರುತಿ ವ್ಯಾನ್ No. MH-03-H-2119, E. No. F8031078049, CH. No. SB3081 M 710725 |
| 6. | 31/02 | 6/02 | 1. ಒಂದು RX ಯಮಹ M/C CKM 858, E. No. DL 1041458, CH. No.-ಇಲ್ಲಾ |
| 7. | 32/02 | 7/02 | 1. ಒಂದು ಕವಾಸಕಿ M/C KA01-E- 6044, E. No. BDE- 026571, CH. No. 300027577 |
| 8. | 33/02 | 8/02 | 1. ಒಂದು TVS 50 XL No. KA05 B- 3721, E. No- ಇಲ್ಲಾ, CH. No- A 608 F 443621 |

P. R. 1116 IInd Additional Chief Matropolitan Magistrate, Bangalore.

## ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರರವರ ಕಛೇರಿಯ ನಡವಳಿಕೆಗಳು

**ಸಂಖ್ಯೆ: ಡಿಆರ್‌ಕೆ: ಎಲ್‌ಕ್ಯೂಡಿ : ಸಿಆರ್: 139: 2001-02, ದಿನಾಂಕ: 22ನೇ ಸೆಪ್ಟೆಂಬರ್, 2003**

**ವಿಷಯ:** ಬಂಗಾರಪೇಟೆ ತಾಲ್ಲೂಕು ಶ್ರೀ ಬೀರೇಶ್ವರ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿ. ಕಾಮಸಮುದ್ರ ಈ ಸಂಘವನ್ನು ಪುನಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:** 1. ಈ ಕಚೇರಿಯ ಆದೇಶದ ಸಂಖ್ಯೆ: ಡಿಆರ್‌ಕೆ: ಎಲ್‌ಕ್ಯೂಡಿ: ಸಿಆರ್. 139: 2001-02, ದಿನಾಂಕ: 27-11-2002.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪತ್ರದ ಸಂಖ್ಯೆ: ಸನಿ: 49: ಬಿಬಿಎಂ: ಎಲ್‌ಕ್ಯೂಡಿ: ಸಿಆರ್. 53: 2003-04, ದಿನಾಂಕ: 15-9-2003.

**ಪ್ರಸ್ತಾವನೆ:**

ಬಂಗಾರಪೇಟೆ ತಾಲ್ಲೂಕು ಶ್ರೀ ಬೀರೇಶ್ವರ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿ., ಇದು ತನ್ನ ಕಾರ್ಯವನ್ನು ನಿರ್ವಹಿಸದೆ ಸ್ಥಗಿತಗೊಂಡಿದ್ದರಿಂದ ಸಂಘವನ್ನು ಋಣಸಮಾಪನೆಗೊಳಪಡಿಸಿ ಸಂಘಕ್ಕೆ ಶ್ರೀ ಕೆ. ಎನ್. ತಿಮ್ಮಯ್ಯ, ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಸಂಘಗಳ ಉಪನಿಬಂಧಕರವರ ಕಛೇರಿ, ಕೋಲಾರ ಜಿಲ್ಲೆ, ಕೋಲಾರ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಉಲ್ಲೇಖ (1)ರಲ್ಲಿ ಆದೇಶವನ್ನು ಹೊರಡಿಸಲಾಗಿತ್ತು.

ನಂತರ ಶ್ರೀ ಕೆ. ಎನ್. ತಿಮ್ಮಯ್ಯ ಇವರು ನಿವೃತ್ತಿ ಹೊಂದಿದ್ದುದರಿಂದ ಅವರ ಬದಲಿಗೆ ಶ್ರೀ ಎಂ. ಗಂಗಪ್ಪ, ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರವರ ಕಛೇರಿ, ಕೋಲಾರ ಉಪವಿಭಾಗ, ಕೋಲಾರ ಇವರನ್ನು ಸಮಾಪನಾಧಿಕಾರಿಯನ್ನಾಗಿ ಆದೇಶವನ್ನು ಮಾರ್ಪಡಿಸಲಾಗಿದ್ದಿತು.

ಈಗ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ಈ ಕೆಳಕಂಡಂತೆ ವರದಿಯನ್ನು ಸಲ್ಲಿಸಿರುತ್ತಾರೆ.

ಬಂಗಾರಪೇಟೆ ತಾಲ್ಲೂಕು ಶ್ರೀ ಬೀರೇಶ್ವರ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿ., ಕಾಮಸಮುದ್ರ ಈ ಸಂಘದ ಕಾರ್ಯವ್ಯಾಪ್ತಿಗೆ ಬರುವ ಕಾಮಸಮುದ್ರ ಹೋಬಳಿ ಮತ್ತು ಬೂದಿಕೋಟೆ ಹೋಬಳಿಗಳಲ್ಲಿ ಸುಮಾರು 25000 ಕುರಿಗಳನ್ನು ಒಂದು 1000 ಕುಟುಂಬದವರು ಹೊಂದಿದ್ದು. ಈ ಹೋಬಳಿಯಲ್ಲಿ ಹೆಚ್ಚಾಗಿ ಕಾಡು ಮತ್ತು ನೀರಿನ ಅನುಕೂಲವಿರುವುದರಿಂದ ಕುರಿಗಳ ಅಭಿವೃದ್ಧಿಗೆ ಉತ್ತಮವಾದ ವಾತಾವರಣ ಹೊಂದಿರುವುದು. ಅಲ್ಲದೆ ಕುರಿಗಳ ಅಭಿವೃದ್ಧಿಗೆ ಯೋಗ್ಯವಾದ ಸ್ಥಳವೆಂದು ಪಶು ಸಂಗೋಪನೆ ಇಲಾಖೆಯವರು ಕಾರ್ಯವನ್ನು ಹಮ್ಮಿಕೊಂಡಿರುತ್ತಾರೆ ಎಂಬುದಾಗಿ ಸಂಘದ ಸಮಾಪನಾಧಿಕಾರಿಗಳು ವರದಿ ಮಾಡಿರುತ್ತಾರೆ ಎಂಬುದಾಗಿ ತಿಳಿಸಿ ಸಂಘವನ್ನು ಪುನಶ್ಚೇತನಗೊಳಿಸಬೇಕೆಂದು ಕೋರಿರುತ್ತಾರೆ.

ಋಣ ಸಮಾಪನೆಯಲ್ಲಿರುವ ಬಂಗಾರಪೇಟೆ ತಾಲ್ಲೂಕು ಶ್ರೀ ಬೀರೇಶ್ವರ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿ., ಕಾಮಸಮುದ್ರ ಈ ಸಂಘವನ್ನು ಪುನಃಶ್ಚೇತನಗೊಳಿಸುವುದರಿಂದ ಸದಸ್ಯರಿಗೆ ಪ್ರಯೋಜನ ಇದ್ದು ಪುನಃಶ್ಚೇತನಗೊಳಿಸಬೇಕೆಂದು, ಸಂಘದ ಸಮಾಪನಾಧಿಕಾರಿಗಳು ಮತ್ತು ಗ್ರಾಮಸ್ಥರು ಕೋರಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ, ಸಂಘವನ್ನು ಪುನಃಶ್ಚೇತನಗೊಳಿಸಲು ಈ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69 ಸಿಎಲ್‌ಎಂ: 2001, ದಿನಾಂಕ: 21-11-2001ರ ರೀತ್ಯಾ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಬಿ. ಸಿ. ಸತೀಶ, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಉಲ್ಲೇಖ (1)ರಲ್ಲಿ ಬಂಗಾರಪೇಟೆ ತಾಲ್ಲೂಕು ಶ್ರೀ ಬೀರೇಶ್ವರ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿ., ಕಾಮಸಮುದ್ರ ಇದನ್ನು ಋಣಸಮಾಪನೆಗೊಳಿಸಿ ಸಮಾಪನಾಧಿಕಾರಿಯನ್ನು ನೇಮಕ ಮಾಡಿರುವ ಆದೇಶವನ್ನು ರದ್ದುಪಡಿಸಿ ಸಂಘವನ್ನು ಪುನಃಶ್ಚೇತನಗೊಳಿಸಲಾಗಿದೆಯೆಂದು ಆದೇಶವನ್ನು ಹೊರಡಿಸಲಾಗಿದೆ ಹಾಗೂ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸಂಘವನ್ನು ಪುನಃಶ್ಚೇತನಗೊಳಿಸಿ ಆದೇಶಿಸಿದೆ.

**ಷರತ್ತುಗಳು**

1. ಸಂಘವು ಈ ಆದೇಶ ಹೊರಡಿಸಿದ ಒಂದು ತಿಂಗಳೊಳಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, ನಿಯಮ ಮತ್ತು ಸಂಘದ ಉಪನಿಯಮಗಳಲ್ಲಿ ಹೇಳಿರುವ ಪ್ರಕಾರ ಸರ್ವ ಸದಸ್ಯರ ಸಭೆ ನಡೆಸಲು ಹಾಗೂ ಆಡಳಿತ ಮಂಡಳಿಯನ್ನು ರಚಿಸಲು ಕ್ರಮ ತೆಗೆದುಕೊಳ್ಳತಕ್ಕದ್ದು.

2. ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ಹಾಲಿ ಇದ್ದಂತೆ ಚಾಲ್ತಿ ಲೆಕ್ಕಗಳನ್ನು ಮುಂದುವರೆಸಿಕೊಂಡು ಹೋಗುವುದು.
3. ಸಮಾಪನಾಧಿಕಾರಿಯು ತಮ್ಮ ಅವಧಿಯಲ್ಲಿ ವ್ಯವಹಾರ ಮಾಡಿದ್ದಲ್ಲಿ ಲೆಕ್ಕಗಳನ್ನು ಅಳವಡಿಸಿಕೊಂಡು ಕಲಂ 63ರ ರೀತ್ಯಾ ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ: 22-9-2003 ರಂದು ಹೊರಡಿಸಿದೆ.

ಬಿ. ಸಿ. ಸತೀಶ್

ಪಿ. ಆರ್. 1118 ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ.

## ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯವಾಹಿಗಳು

## ನಂ. ಡಿಆರ್‌ಟಿ: ಡಿಎಲ್‌ಎಸ್:69: 99-2000, ದಿನಾಂಕ: 26ನೇ ಸೆಪ್ಟೆಂಬರ್ 2003

**ವಿಷಯ:** ತುಮಕೂರು ತಾಲ್ಲೂಕು ಕಸಬಾ ಹೋಬಳಿ ಹಬ್ಬತ್ತನಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ. ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು ತುಮಕೂರು ಉಪ ವಿಭಾಗ, ತುಮಕೂರು ಇವರ ಪತ್ರ ಸಂಖ್ಯೆ: ಸನಿತು: 32: ಡಿಎಲ್‌ಎಸ್: 270: 99-2000, ದಿನಾಂಕ: 10-2-2000.
2. ಸಹಕಾರ ಸಂಘಗಳ ಜಂಟಿ ನಿಬಂಧಕರು (ಪತ್ತು) ಕೇಂದ್ರ ಕಛೇರಿ ಬೆಂಗಳೂರು-52 ಈ ಕಛೇರಿಯ ಸಮಸಂಖ್ಯೆ ಪತ್ರದ ನಂ. ದಿನಾಂಕ: 24-7-2003.
3. ಈ ಕಚೇರಿಯ ಸಮಸಂಖ್ಯೆ: ಪತ್ರದ ದಿನಾಂಕ: 24-7-2003.
4. ಸಹಕಾರ ಸಂಘಗಳ ಸಹಾಯಕ ನಿಬಂಧಕರು ತುಮಕೂರು ಇವರ ಪತ್ರ ಸಂಖ್ಯೆ: ಸನಿತು: 32: ಡಿಎಲ್‌ಎಸ್: 270: 2003-04, ದಿನಾಂಕ: 8-8-2003.
5. ವಿಶೇಷಾಧಿಕಾರಿಗಳು, ಸಹಕಾರ ಇಲಾಖೆ, ಸರ್ಕಾರದ ಸಚಿವಾಲಯ ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಎಂಡಬ್ಲ್ಯೂ: 128: ಸಿಸಿಬಿ 93, ದಿ: 11-11-96.

**ಪ್ರಸ್ತಾವನೆ:**

ಈ ಸಂಘವು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 7ರ ಮೇರೆಗೆ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 7ರ ಮೇರೆಗೆ ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಇವರಿಂದ ನೊಂದಣಿ ಸಂಖ್ಯೆ: ಡಿಆರ್‌ಸಿಎಸ್:710:76-77 ದಿನಾಂಕ: 25-9-1976ರ ಮೇರೆಗೆ ನೊಂದಣಿಯಾಗಿದ್ದು. ಇದರ ಕಾರ್ಯವ್ಯಾಪ್ತಿಯಲ್ಲಿ ಬೈಲಾ ನಂ.2 ರ ಮೇರೆಗೆ ತುಮಕೂರು ಕಸಬಾ ಹೋಬಳಿ (1) ಹಬ್ಬತ್ತನಹಳ್ಳಿ (2) ಹಾಲನೂರು (3) ಮಲ್ಲಸಂದ್ರ (4) ಅಮಲಾಪುರ (5) ಕೊತ್ತಿಹಳ್ಳಿ (6) ಮಲ್ಲಸಂದ್ರಪಾಳ್ಯ (7) ತಿಗಳರಪಾಳ್ಯ, ಈ ಗ್ರಾಮಗಳಿಗೆ ವಿಸ್ತರಿಸಿದ್ದು, ಹಬ್ಬತ್ತನಹಳ್ಳಿ ಗ್ರಾಮದಲ್ಲಿ ಕಾರ್ಯನಿರ್ವಹಿಸುತ್ತಿತ್ತು.

ಸಂಘದಲ್ಲಿ ಕಾರ್ಯಕಾರಿ ಮಂಡಳಿ ಅಸ್ತಿತ್ವದಲ್ಲಿ ಇರುವುದಿಲ್ಲ ಆದುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರು ಆದೇಶ ಸಂಖ್ಯೆ: ಸನಿ 32: ಆಮಂರ : ವಿನೇ: ಸಿಆರ್-53, 98-99, ದಿನಾಂಕ: 26-2-1999ರ ಮೇರೆಗೆ ಸಹಕಾರ ವಿಸ್ತರಣಾಧಿಕಾರಿ (ದಕ್ಷಿಣ) ಇವರನ್ನು ವಿಶೇಷಾಧಿಕಾರಿಯಾಗಿ ನೇಮಕ ಮಾಡಿರುತ್ತಾರೆ.

ಈ ಸಂಘವು ದಿನಾಂಕ: 31-3-1999ಕ್ಕೆ ರೂ. 9,82,524-47 ನಷ್ಟದಲ್ಲಿರುತ್ತದೆ. 1998-99ರ ಸಾಲಿನ ಅಂತ್ಯಕ್ಕೆ ಸದಸ್ಯರಿಂದ ಸಂಘಕ್ಕೆ 17,49,307-28 ಇದ್ದು ರೂ. 5, 85,500ಗಳನ್ನು ಸಾಲ ಹಂಚಿಕೆ ಮಾಡಿ ಸಂಘವು ಸಾಲ ವಸೂಲಿ ಮಾಡದೇ ಕೇವಲ ರೂ. 2,16,194-00ಗಳನ್ನು ಮಾತ್ರ ವಸೂಲಿ ಮಾಡಿರುತ್ತೆ. ಬ್ಯಾಂಕಿಗೆ ಪಾವತಿಸಬೇಕಾದ ಮೊತ್ತಕ್ಕಿಂತ ರೂ. 6,16.681-72, 98-99 ರ ಅಂತ್ಯಕ್ಕೆ ವ್ಯತ್ಯಾಸ ಇರುತ್ತದೆ.

ಸಂಘದ ಸದಸ್ಯರಿಗೆ ಸಾಲ ಮರುಪಾವತಿ ಮಾಡುವ ಸಾಮರ್ಥ್ಯವಿದ್ದಾಗ್ಯೂ, ಸದಸ್ಯರು ಉದ್ದೇಶಪೂರ್ವಕವಾಗಿ ಸಾಲ ಮರುಪಾವತಿ ಮಾಡಿಲ್ಲ. ಸಂಘವು ಹಾಲಿ ಆಹಾರ ಪದಾರ್ಥಗಳ ವಿತರಣೆ ಮಾತ್ರ ಮಾಡುತ್ತಿದೆ. ಸಂಘದ ಸದಸ್ಯರಿಗೆ ಸಂಘದ ಕಾರ್ಯ ಚಟುವಟಿಕೆಗಳ ಬಗ್ಗೆ ಆಸಕ್ತಿ ಇರುವುದಿಲ್ಲ. ಸಂಘದ ಬಹುತೇಕ ಸದಸ್ಯರು ಸುಸ್ತಿದಾರರಾಗಿರುವುದರಿಂದ 1999-2000 ರಿಂದ 2003-2004ನೇ ಸಾಲುಗಳಿಗೆ ಸಂಘದ ಆಡಳಿತ ಮಂಡಳಿಗೆ ಚುನಾವಣೆ ನಡೆಸಲು ಸಾಧ್ಯವಾಗಿಲ್ಲ. ಈ ಕಾರಣಗಳಿಂದ ಸಂಘವನ್ನು ಸಮಾಪನೆಗೊಳಿಸಿ, ಸಹಕಾರ ವಿಸ್ತರಣಾಧಿಕಾರಿ (ದಕ್ಷಿಣ) ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಲು ಉಲ್ಲೇಖದ ಪತ್ರದ ಮೇರೆಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರು ಶಿಫಾರಸ್ಸು ಮಾಡಿರುತ್ತಾರೆ. ಸಹಾಯಕ ನಿಬಂಧಕರವರ ಪ್ರಸ್ತಾವೆಯನ್ನು ಪರಿಶೀಲಿಸಲಾಗಿ ಮೇಲೆ ವಿವರಿಸಿರುವ ಕಾರಣಗಳಿಂದ ಈ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವಾಗಿರುವುದರಿಂದ ಈ ಕೆಳಕಂಡ ಆದೇಶ ಹೊರಡಿಸಿದೆ.

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಾಗೂ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 72 (2) (ಬಿ) ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ: 69: ಸಿಎಲ್‌ಎಂ: 2001, ದಿನಾಂಕ: 21-11-2001ರ ಮೇರೆಗೆ ದತ್ತವಾಗಿರುವ ಅಧಿಕಾರವನ್ನು ಪ್ರಯೋಗಿಸಿ ಮಹಮದ್ ಸಲೀಂ, ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ತುಮಕೂರು ತಾಲ್ಲೂಕು ಹಬ್ಬತ್ತನಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ., ಇದನ್ನು ಸಮಾಪನೆಗೊಳಿಸಿ ಈ ಸಂಘಕ್ಕೆ ಮಾರಾಟಾಧಿಕಾರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ತುಮಕೂರು ಇವರನ್ನು ಸಂಘದ ಸಮಾಪನಾಧಿಕಾರಿಯಾಗಿ ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಯಾಗಿ ನೇಮಕ ಹೊಂದಿರುವ ಮಾರಾಟಾಧಿಕಾರಿಯವರು ಸಂಘದ ಕಾರ್ಯಭಾರವನ್ನು ವಹಿಸಿಕೊಂಡು, ಸಂಘದ ಲೆಕ್ಕ ಪುಸ್ತಕಗಳು, ದಾಖಲಾತಿಗಳು ಸಂಘದ ಲೆಕ್ಕ ಪುಸ್ತಕಗಳು, ದಾಖಲಾತಿಗಳು ಸಂಘದ ಎಲ್ಲಾ ಚರ: ಸ್ಥಿರ ಆಸ್ತಿ ಹಾಗೂ ಜವಾಬ್ದಾರಿಗಳನ್ನು ಸಂಬಂಧಿಸಿದವರಿಂದ ವಹಿಸಿಕೊಂಡು ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಲು ಸಹಕಾರ ಸಂಘಗಳ ನಿಬಂಧಕರ ಸುತ್ತೋಲೆ ರೀತ್ಯಾ ಮತ್ತು ಆಡಿಟ್ ಆದ ಸಂಘದ ಆಸ್ತಿ ಜವಾಬ್ದಾರಿಗಳ ರೀತ್ಯಾ ಆದ್ಯತಾ ಪಟ್ಟಿಯನ್ನು ತಯಾರಿಸಿ ಅನುಮೋದನೆಗೆ ಸಲ್ಲಿಸಲು ಆದೇಶಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ: 26-9-2003 ರಂದು ನನ್ನ ಹಸ್ತಾಕ್ಷರ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿರುತ್ತೇನೆ.

**ಮೊಹಮ್ಮದ್ ಸಲೀಂ**

ಪಿ. ಆರ್. 1119 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

## ಅಮೊ: ವಾಹನ : 50 : 2002-2003

| | |
|---|---|
| **ಉಪಸ್ಥಿತರು** | ಶ್ರೀ ಶಿವರಾಜ್ ಸಿಂಗ್, ಭಾ.ಅ.ಸೇ.<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ. |
| **ಫಿರ್ಯಾಧಿದಾರರು** | ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ. |
| **ಆರೋಪಿಗಳು** | 1) ನಜೀರ್ ಅಹಮ್ಮದ್ 2) ಶ್ರೀನಿವಾಸ್ |
| **ಬಾಧ್ಯತೆದಾರರು** | ಯಾರೂ ಬಂದಿರುವುದಿಲ್ಲ. |

**ಪ್ರಸ್ತಾವನೆ:**

ದಿನಾಂಕ: 3-1-2003ರಂದು ವಲಯ ಅರಣ್ಯಾಧಿಕಾರಿ, ಹೊಸನಗರ ರಿಪ್ಪನ್ ಪೇಟೆ ವನಪಾಲಕ ಮತ್ತು ಸಿಬ್ಬಂದಿಯವರು ಹೊಸನಗರ ತಾಲ್ಲೂಕು ಕೆರೆಹಳ್ಳಿ ಹೋಬಳಿ ಗವಟೂರು ಗ್ರಾಮದಲ್ಲಿರುವ ನೆಹರು ಇಂಡಸ್ಟ್ರೀಸ್ ಅಂಡ್ ವರ್ಕ್ಸ್ ಸಮಿಲ್ ಆವರಣದಲ್ಲಿ ಒಂದು ಮೆಟಡೊರ್ ತಪಾಸಣೆ ಮಾಡಲಾಗಿ ವಾಹನ ಚಾಲಕ ಮತ್ತು ಅವರ ಸಹಾಯಕರನ್ನು ವಿಚಾರಿಸಲಾಗಿ ಸಾಗುವಾನಿ ತುಂಡು 9=0.898M3 ಇದ್ದು, ಇವುಗಳನ್ನು ಸಾಗಿಸಲು ಯಾವುದೇ ರಹದಾರಿ ಇಲ್ಲವೆಂದು ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಅರಣ್ಯ ಉತ್ಪನ್ನವನ್ನು ಜಪ್ತು ಮಾಡಿ ಇಬ್ಬರು ಆಸಾಮಿಗಳ ಹೆಸರು ಶ್ರೀನಿವಾಸ್ ಮತ್ತು ನಜೀರ್ ಇವರ ಮೇಲೆ ಕೇಸು ದಾಖಲು ಮಾಡಿ ಇವರನ್ನು ಜೆ.ಎಂ.ಎಫ್.ಸಿ. ಗೆ ಒಪ್ಪಿಸಿ ವಾಹನ ಮೆಟಡೊರ್ ನಂ. KA-14-1801 ಇಂಜಿನ್ ನಂಬರ್ ಡಿ316578 ಆಗಿದ್ದು, ಲಾರಿ ಒಳಗಡೆ 14 ಸಾಗುವಾನಿ ತುಂಡುಗಳು 1,830 ಘ. ಮೀ. ಇದ್ದು ಈ ಸಾಗುವಾನಿ ತುಂಡುಗಳ ಮೇಲೆ ಯಾವುದೇ ಇಲಾಖೆಯ ಛಾಪಾವಾಗಲೀ ಸಾಗಿಸಲು ರಹದಾರಿಯಾಗಲೀ, ಇಲ್ಲದ ಕಾರಣ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು ಸಾಗುವಾನಿ ತುಂಡುಗಳನ್ನು ಜಪ್ತು ಮಾಡಿ ಮಹಜರು ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71 (ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಸೆಕ್ಷನ್ 144, 165 ರ ಪ್ರಕಾರ ವಲಯ ಅರಣ್ಯಾಧಿಕಾರಿ, ಹೊಸನಗರ ಇವರ ಅ.ಮೊ. ಸಂಖ್ಯೆ: 98/ 02-03 ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ, ಇವರ ಸಮಕ್ಷಮ ಹಾಜರು ಪಡಿಸಿರುತ್ತಾರೆ.

ನಂತರ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿ: 23-5-03ರಂದು 30 (ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ ಬೆಂಗಳೂರು ಮತ್ತು ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಗಿತ್ತು. ಈ ಪ್ರಕಟಣೆ ದಿನಾಂಕ: 3-6-2003ರಂದು ವನರಾಜ ದಿನಪತ್ರಿಕೆಯಲ್ಲೂ ಮತ್ತು ದಿ: 12-6-2003 ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿರುವುದು ಸ್ಪಷ್ಟವಾಗಿರುತ್ತದೆ. ಈ ಮೊಕದ್ದಮೆಯಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರೂ ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತುಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

### ಆದೇಶ

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಶಿವರಾಜ್ ಸಿಂಗ್ ಭಾ.ಅ.ಸೇ. ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ರ ಸೆಕ್ಷನ್ 71 ಎ ರಿಂದ ಜಿ ಪ್ರಕಾರ ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರು ಜಪ್ತು ಮಾಡಿದ ವಾಹನ ಮೆಟಡೊರ್ ವ್ಯಾನ್‌ನಂ. KA-14-1801, ಚಾಸ್ಸಿ ನಂಬರ್ 3FD 512471, ಇಂಜಿನ್ ನಂಬರ್ D 316578ನ್ನು ಮತ್ತು ಈ ವಾಹನದಲ್ಲಿದ್ದ 9=0.898 ಘ. ಮೀ. ಸಾಗುವಾನಿ ತುಂಡುಗಳು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ವಾಹನದ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ ಗಣಕಯಂತ್ರದಲ್ಲಿ ಮುದ್ರಿಸಿ ನಂತರ ಸರಿಪಡಿಸಿ ದಿ: 27.9.2003 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ

ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳೊಳಗಾಗಿ ಯಾರೂ ಈ ನ್ಯಾಯಾಲಯಕ್ಕೆ ಕ್ಲೈಮ್ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಪಿ. ಆರ್. 1120 ಸಾಗರ ವಿಭಾಗ, ಸಾಗರ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಅಮೊ: ವಾಹನ : 04 : 2003-2004**

| | |
|---|---|
| **ಉಪಸ್ಥಿತರು** | ಶ್ರೀ ಶಿವರಾಜ್ ಸಿಂಗ್, ಭಾ.ಅ.ಸೇ.<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ. |
| **ಫಿರ್ಯಾಧಿದಾರರು** | ಸಹಾಯಕ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ |
| **ಆರೋಪಿಗಳು** | 1) ಟಿ. ಆರ್. ರವಿ |
| **ಬಾಧ್ಯತೆದಾರರು** | ಯಾರೂ ಬಂದಿರುವುದಿಲ್ಲ. |

**ಪ್ರಸ್ತಾವನೆ:**

ದಿನಾಂಕ: 7-5-2003ರಂದು ಸಹಾಯಕ ಅರಣ್ಯಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸಾಗರ ತಾಲ್ಲೂಕು ಆನಂದಪುರಂ ಹೋಬಳಿ ಐಗಿನಬೈಲು ಗ್ರಾಮದ ಆನಂದಪುರಂ ಗ್ರಾಮದ ಆನಂದಪುರಂದಿಂದ ಸಾಗರಕ್ಕೆ ಬರುವ ಪಿಡಬ್ಲ್ಯೂಡಿ ರಸ್ತೆಯಲ್ಲಿ ಐಗಿನ ಬೈಲು ಸಸ್ಯಕ್ಷೇತ್ರದ ಹತ್ತಿರ ವಾಹನ ಹಿಡಿಯಲಾಗಿತ್ತು. ಆನಂದಪುರಂ ಹೋಬಳಿ ಯಡೇಹಳ್ಳಿ ಕ್ರಾಸ್ ಹತ್ತಿರ ಕಾಯುತ್ತಿರುವಾಗ ರಿಪ್ಪನ್ ಪೇಟೆ ಕಡೆಯಿಂದ ಒಂದು ಬಿಳಿ ಬಣ್ಣದ ಮಾರುತಿ ವ್ಯಾನ್ ಬರುತ್ತಿರುವುದನ್ನು ತಡೆದು ನಿಲ್ಲಿಸಲು ಸೂಚಿಸಿದಾಗ ನಿಲ್ಲಿಸದೇ ವೇಗವಾಗಿ ಓಡಿಸಿದಾಗ ಇಲಾಖಾ ವಾಹನದಿಂದ ಬೆನ್ನಟ್ಟಿ ಮೇಲ್ಕಂಡ ಸ್ಥಳದಲ್ಲಿ ಆಸಾಮಿಗಳು ಪರಾರಿಯಾಗಲು ಯತ್ನಿಸಿದಾಗ ಇಲಾಖೆಯವರು ಸುತ್ತುವರೆದು ಹಿಡಿಯಲಾಯಿತು. ನಂತರ ವಾಹನವನ್ನು KQ-16-M 2350 ಆಗಿದ್ದು, ವಾಹನದೊಳಗಡೆ 7 ಪ್ಲಾಸ್ಟಿಕ್ ಚೀಲದಲ್ಲಿ ಶ್ರೀಗಂಧದ ಚಕ್ಕೆಗಳು 125 ಕೆ. ಜಿ. ಇದ್ದು ಇವುಗಳನ್ನು ಸಾಗಿಸಲು ಯಾವುದೇ ರಹದಾರಿ ಇಲ್ಲವೆಂದು ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಅರಣ್ಯ ಉತ್ಪನ್ನವನ್ನು ಜಪ್ತು ಮಾಡಿ ಆರೋಪಿಗಳನ್ನು ಜೆ.ಎಂ.ಎಫ್.ಸಿ. ಗೆ ಒಪ್ಪಿಸಿ ವಾಹನ ಮತ್ತು ಶ್ರೀಗಂಧವನ್ನು ಜಪ್ತು ಮಾಡಿ ಮಹಜರು ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71 (ಎ), 84, 86 87 ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಸೆಕ್ಷನ್ 144, 165ರ ಪ್ರಕಾರ ಸಹಾಯಕ ಅರಣ್ಯಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಇವರ ಅ.ಮೊ. ಸಂಖ್ಯೆ: 12/ 03-04, ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ.

ನಂತರ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿ: 23-5-03ರಂದು 30 (ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ ಬೆಂಗಳೂರು ಮತ್ತು ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಗಿತ್ತು. ಈ ಪ್ರಕಟಣೆ ದಿನಾಂಕ: 3-6-2003ರಂದು ವನರಾಜ ದಿನಪತ್ರಿಕೆಯಲ್ಲೂ ಮತ್ತು ದಿ: 12-6-2003 ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿರುವುದು ಸ್ಪಷ್ಟವಾಗಿರುತ್ತದೆ. ಈ ಮೊಕದ್ದಮೆಯಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರೂ ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತುಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಶಿವರಾಜ್ ಸಿಂಗ್ ಭಾ.ಅ.ಸೇ. ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ರ ಸೆಕ್ಷನ್ 71 ಎ ರಿಂದ ಜಿ ಪ್ರಕಾರ ಸಹಾಯಕ ಅರಣ್ಯಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಮಾರುತಿ ವ್ಯಾನ್ ನಂ. KQ-16-M-2350, ಚಾಸ್ಸಿ ನಂಬರ್ ಮತ್ತು ಇಂಜಿನ್ ನಂಬರ್ ಕಾಣಿಸುತ್ತಿಲ್ಲ ಮತ್ತು ಈ ವಾಹನದಲ್ಲಿದ್ದ 125 ಕೆ.ಜಿ. ಶ್ರೀಗಂಧವು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ವಾಹನದ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ ಗಣಕಯಂತ್ರದಲ್ಲಿ ಮುದ್ರಿಸಿ ನಂತರ ಸರಿಪಡಿಸಿ ದಿ: 27.9.2003 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳೊಳಗಾಗಿ ಯಾರೂ ಈ ನ್ಯಾಯಾಲಯಕ್ಕೆ ಕ್ಲೈಮ್ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಪಿ. ಆರ್. 1121 ಸಾಗರ ವಿಭಾಗ, ಸಾಗರ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,**
**ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಅಮೊ: ವಾಹನ : 05 : 2003-2004**

| | |
|---|---|
| **ಉಪಸ್ಥಿತರು** | ಶ್ರೀ ಶಿವರಾಜ್ ಸಿಂಗ್, ಭಾ.ಅ.ಸೇ.<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,<br>ಸಾಗರ ವಿಭಾಗ, ಸಾಗರ. |
| **ಫಿರ್ಯಾಧಿದಾರರು** | ವಲಯ ಅರಣ್ಯಾಧಿಕಾರಿ, ಸೊರಬ |
| **ಆರೋಪಿಗಳು** | ಶ್ರೀ ನಾಸೀರ್ ಖಾನ್ |
| **ಬಾಧ್ಯತೆದಾರರು** | ಯಾರೂ ಬಂದಿರುವುದಿಲ್ಲ. |

**ಪ್ರಸ್ತಾವನೆ:**

ದಿನಾಂಕ: 3-5-2003ರಂದು ವಲಯ ಅರಣ್ಯಾಧಿಕಾರಿ, ಸೊರಬ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸೊರಬ ತಾಲ್ಲೂಕು ಕಸಬಾ ಹೋಬಳಿ ಕೊಡಕಣಿ ಗ್ರಾಮದ ಬಸ್ ನಿಲ್ದಾಣದ ಹತ್ತಿರ ಕಾಯುತ್ತಿರುವಾಗ ಶಿರಾಳಕೊಪ್ಪ ಕಡೆಯಿಂದ ಸೊರಬಕ್ಕೆ ಒಂದು ದ್ವಿಚಕ್ರ ವಾಹನ ಬರುತ್ತಿರುವುದನ್ನು ತಡೆದು ನಿಲ್ಲಿಸಿ ಪರಿಶೀಲಿಸಲಾಗಿ ವಾಹನದಲ್ಲಿದ್ದ ಇಬ್ಬರು ಆಸಾಮಿಗಳಲ್ಲಿ ಒಬ್ಬ ಆಸಾಮಿ ವಾಹನದಿಂದ ಹಾರಿ ಓಡಿ ಪರಾರಿಯಾಗಿರುತ್ತಾನೆ. ಇನ್ನೊಬ್ಬನ ಹೆಸರು ಶ್ರೀ ನಾಸೀರ್ ಖಾನ್‌ನನ್ನು ಬಂಧಿಸಿ, ವಿಚಾರಿಸಿ ನಂತರ ಜೆ.ಎಂ.ಎಫ್.ಸಿ ಗೆ ಒಪ್ಪಿಸಿ ವಾಹನ ಹೀರೋ ಹೊಂಡಾ ಪ್ಯಾಶನ್ KA-15-H -4591 ಆಗಿದ್ದು, ವಾಹನದಲ್ಲಿ ಎರಡು ಶ್ರೀಗಂಧದ ತುಂಡುಗಳಿದ್ದು, ಅವುಗಳ ತೂಕ 45 ಕೆ. ಜಿ. ಇದ್ದು, ಶ್ರೀಗಂಧದ ತುಂಡುಗಳ ಮೇಲೆ ಯಾವುದೇ ಇಲಾಖಾ ನಂಬರ್ ಆಗಲೀ ಸಾಗಿಸಲು ರಹದಾರಿಯಾಗಲೀ ಇಲ್ಲದೇ ಇದ್ದುದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71 (ಎ), 84, 86, 50 ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಸೆಕ್ಷನ್ 144, 165 ರ ಪ್ರಕಾರ ವಲಯ ಅರಣ್ಯಾಧಿಕಾರಿ, ಸೊರಬ ಇವರ ಅ.ಮೊ. ಸಂಖ್ಯೆ: 20/ 03-04, ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ.

ನಂತರ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿ: 23-5-03ರಂದು 30 (ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ ಬೆಂಗಳೂರು ಮತ್ತು ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಗಿತ್ತು. ಈ ಪ್ರಕಟಣೆ ದಿನಾಂಕ: 3-6-2003ರಂದು ವನರಾಜ ದಿನಪತ್ರಿಕೆಯಲ್ಲೂ ಮತ್ತು ದಿ: 12-6-2003 ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿರುವುದು ಸ್ಪಷ್ಟವಾಗಿರುತ್ತದೆ. ಈ ಮೊಕದ್ದಮೆಯಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರೂ ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತುಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಶಿವರಾಜ್ ಸಿಂಗ್ ಭಾ.ಅ.ಸೇ. ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ರ ಸೆಕ್ಷನ್ 71 ಎ ರಿಂದ ಜಿ ಪ್ರಕಾರ ವಲಯ ಅರಣ್ಯಾಧಿಕಾರಿ, ಸೊರಬ ಇವರು ಜಪ್ತು ಮಾಡಿದ ವಾಹನ ಹೀರೋ ಹೊಂಡಾ ಫ್ಯಾಶನ್ ನಂ. KA-15-H-4591ರ ಚಾಸ್ಸಿ ನಂಬರ್ 01ಎ21ಸಿ00265, ಇಂಜಿನ್ ನಂಬರ್ 17510101 ಮತ್ತು ಈ ವಾಹನದಲ್ಲಿದ್ದ 45 ಕೆ.ಜಿ. ಶ್ರೀಗಂಧವು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ವಾಹನದ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ ಗಣಕಯಂತ್ರದಲ್ಲಿ ಮುದ್ರಿಸಿ ನಂತರ ಸರಿಪಡಿಸಿ ದಿ: 27.9.2003 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳೊಳಗಾಗಿ ಯಾರೂ ಈ ನ್ಯಾಯಾಲಯಕ್ಕೆ ಕ್ಲೈಮ್ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ. ಆರ್. 1122

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

## ಅಮೊ: ವಾಹನ : 03 : 2003-2004

| | |
|---|---|
| **ಉಪಸ್ಥಿತರು** | ಶ್ರೀ ಶಿವರಾಜ್ ಸಿಂಗ್, ಭಾ.ಅ.ಸೇ.<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ. |
| **ಫಿರ್ಯಾಧಿದಾರರು** | ವಲಯ ಅರಣ್ಯಾಧಿಕಾರಿ, ನಗರ |
| **ಆರೋಪಿಗಳು** | ಪತ್ತೆಯಾಗಿರುವುದಿಲ್ಲ. |
| **ಬಾಧ್ಯತೆದಾರರು** | ಯಾರೂ ಬಂದಿರುವುದಿಲ್ಲ. |

**ಪ್ರಸ್ತಾವನೆ:**

ದಿನಾಂಕ: 21-4-2003ರಂದು ನಗರ ವಲಯದ ನಾಗೋಡಿ ಅರಣ್ಯ ತನಿಖಾ ಠಾಣೆ ವನಪಾಲಕರು ಮತ್ತು ಸಿಬ್ಬಂದಿಯವರು ಕರ್ತವ್ಯದ ಅವಧಿಯಲ್ಲಿ ದಿನಾಂಕ: 5-30 ಗಂಟೆಯಲ್ಲಿ ಒಂದು ವಾಹನ ನಿಟ್ಟೂರು ಕಡೆಯಿಂದ ಬರುತ್ತಿರುವುದನ್ನು ನೋಡಿ ಸಮವಸ್ತ್ರದಾರಿಗಳನ್ನು ಕಂಡು ವಾಹನವನ್ನು ಗೇಟಿನಿಂದ 100 ಮೀಟರ್ ದೂರ ನಿಲ್ಲಿಸಿ ಆಸಾಮಿಗಳು ಓಡುತ್ತಿರುವುದನ್ನು ನೋಡಿ ಬೆನ್ನಟ್ಟಿದ್ದರು ಕೈಗೆ ಸಿಗದೇ ಓಡಿ ಹೋಗಿರುತ್ತಾರೆ. ನಂತರ ಪಂಚರ ಸಮಕ್ಷಮ ವಾಹನ ಪರಿಶೀಲಿಸಲಾಗಿ ಟಾಟಾ ಇಂಡಿಕಾ ಕಾರು KA-19-N-4697 ಆಗಿದ್ದು, ಕಾರಿನ ಒಳಗಡೆ ಪರಿಶೀಲಿಸಲಾಗಿ ಡ್ರೈವರ್ ಸೀಟಿನ ಕೆಳಭಾಗದಲ್ಲಿ ಪೆಟ್ಟಿಗೆ ಆಕಾರವಾಗಿ ಮಾಡಿ ಅದರೊಳಗೆ ಅಳತೆ ಮಾಡಲು ಬಾರದ ಶ್ರೀಗಂಧದ ಚಕ್ಕೆಗಳು ಸುಮಾರು 19 ಕೆ. ಜಿ. ಇದ್ದು, ಇವುಗಳನ್ನು ಸಾಗಿಸಲು ಯಾವುದೇ ರಹದಾರಿ ಇಲ್ಲವೆಂದು ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಅರಣ್ಯ ಉತ್ಪನ್ನವನ್ನು ಜಪ್ತು ಮಾಡಿ, ಮಹಜರು ಕ್ರಮ ಜರುಗಿಸಿ, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71 (ಎ), 84, 86, 87, ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಸೆಕ್ಷನ್ 144, 165ರ ಪ್ರಕಾರ ವಲಯ ಅರಣ್ಯಾಧಿಕಾರಿ, ನಗರ ಇವರ ಅ. ಮೊ. ಸಂಖ್ಯೆ 6/ 03-04, ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ, ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ.

ನಂತರ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿ: 23-5-03ರಂದು 30 (ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ ಬೆಂಗಳೂರು ಮತ್ತು ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಗಿತ್ತು. ಈ ಪ್ರಕಟಣೆ ದಿನಾಂಕ: 3-6-2003ರಂದು ವನರಾಜ ದಿನಪತ್ರಿಕೆಯಲ್ಲೂ ಮತ್ತು ದಿ: 12-6-2003 ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿರುವುದು ಸ್ಪಷ್ಟವಾಗಿರುತ್ತದೆ. ಈ ಮೊಕದ್ದಮೆಯಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರೂ ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತುಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಶಿವರಾಜ್ ಸಿಂಗ್ ಭಾ.ಅ.ಸೇ. ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ರ ಸೆಕ್ಷನ್ 71 ಎ ರಿಂದ ಜಿ ಪ್ರಕಾರ ವಲಯ ಅರಣ್ಯಾಧಿಕಾರಿ, ನಗರ ಇವರು ಜಪ್ತು ಮಾಡಿದ ವಾಹನ ಮಾರುತಿ ವ್ಯಾನ್ ನಂ. ಟಾಟಾ ಇಂಡಿಕಾ ಕಾರು KA-19-N-4697ರ ಚಾಸಿಸ್ ನಂಬರ್ 600131ಎಫ್22ಪಿ32850, ಇಂಜಿನ್ ನಂ. 22ಪಿ32831 ಮತ್ತು ಈ ವಾಹನದಲ್ಲಿದ್ದ 19 ಕೆ.ಜಿ. ಶ್ರೀಗಂಧವು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ವಾಹನದ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ ಗಣಕಯಂತ್ರದಲ್ಲಿ ಮುದ್ರಿಸಿ ನಂತರ ಸರಿಪಡಿಸಿ ದಿ: 27.9.2003 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳೊಳಗಾಗಿ ಯಾರೂ ಈ ನ್ಯಾಯಾಲಯಕ್ಕೆ ಕ್ಲೈಮ್ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಪಿ. ಆರ್. 1123 ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

## ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳ ಕಛೇರಿ, ಚಿತ್ರದುರ್ಗ

## ಪ್ರಕಟಣೆ ಸಂಖ್ಯೆ: ಜಿಪವಕಅ : ಚಿ : ಸಿಆರ್ 72: 2003-2004, ದಿನಾಂಕ: 26ನೇ ಸೆಪ್ಟೆಂಬರ್, 2003

**ವಿಷಯ:** 2003-04ನೇ ಸಾಲಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡಲು ಪರಿಶಿಷ್ಟ ವರ್ಗದ ಕಾನೂನು ಪದವೀಧರರನ್ನು ಆಯ್ಕೆ ಮಾಡುವ ಕುರಿತು.

2003-04ನೇ ಸಾಲಿನಲ್ಲಿ ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ವತಿಯಿಂದ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡಲು ಪರಿಶಿಷ್ಟ ವರ್ಗದ ಕಾನೂನು ಪದವೀಧರರನ್ನು ಆಯ್ಕೆ ಮಾಡುವ ಸಲುವಾಗಿ ಕಾನೂನು ಪದವೀಧರರಿಂದ ಅರ್ಜಿಗಳನ್ನು ಕರೆಯಲಾಗಿದೆ. ನಿಗಧಿತ ಅರ್ಜಿ ನಮೂನೆಗಳನ್ನು ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣ ಅಧಿಕಾರಿಗಳ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದು.

ಭರ್ತಿ ಮಾಡಲಾದ ಅರ್ಜಿಗಳನ್ನು ದಿನಾಂಕ: 15-10-2003ರೊಳಗಾಗಿ ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳ ಕಛೇರಿಗೆ ಸಲ್ಲಿಸಬೇಕು. ನಂತರ ಬರುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**ನಿಯಮಗಳು**

1. ಅರ್ಜಿ ಸಲ್ಲಿಸಲು ಗೊತ್ತುಪಡಿಸಿದ ಕೊನೆಯ ದಿನಾಂಕಕ್ಕೆ ಕಾನೂನು ಪದವಿ ಪಡೆದು 2 ವರ್ಷಕ್ಕೆ ಮೀರಿರಬಾರದು.
2. ತರಬೇತಿಯನ್ನು ಚಿತ್ರದುರ್ಗ ಜಿಲ್ಲೆಯಲ್ಲಿಯೇ ಪಡೆಯಬೇಕು.
3. ಅರ್ಜಿ ಸಲ್ಲಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು 35ಕ್ಕೆ ಮೀರಿರಬಾರದು.
4. ಆಯ್ಕೆ ಮಾಡಲಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ಸರ್ಕಾರದ ಆದೇಶದ ರೀತ್ಯಾ ಶಿಷ್ಯ ವೇತನವನ್ನು ನೀಡಲಾಗುವುದು.
5. ಪರಿಶಿಷ್ಟ ವರ್ಗದ ಕಾನೂನು ಪದವೀಧರ ಅಭ್ಯರ್ಥಿಗಳಿಗೆ ಸರ್ಕಾರದ ನಿಯಮಾನುಸಾರ ವಾರ್ಷಿಕ ವರಮಾನ ಮಿತಿಯು ರೂ.11000.00 ಗಳಿಗೆ ಮೀರಿರಬಾರದು.
6. ಆಯ್ಕೆಯಾದ ಅಭ್ಯರ್ಥಿಗಳು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರು ಅಥವಾ 20 ವರ್ಷಗಳ ಕಾಲ ಕಡಿಮೆ ಇಲ್ಲದ ವಕೀಲ ವೃತ್ತಿಯಲ್ಲಿ ಸೇವೆ ಸಲ್ಲಿಸಿರುವ ನ್ಯಾಯಾವಾದಿಗಳ ಬಳಿ ತರಬೇತಿ ಪಡೆಯಬೇಕು ಹಾಗೂ ಯಾರ ಬಳಿ ತರಬೇತಿ ಪಡೆಯುತ್ತಿದ್ದಾರೆ ಎಂಬ ಬಗ್ಗೆ ಲಿಖಿತ ರೂಪದಲ್ಲಿ ತಿಳಿಸಬೇಕು.
7. ತರಬೇತಿ ಅವಧಿಯು 4 ವರ್ಷವಿದ್ದು ಆಯ್ಕೆಯಾದ ಅಭ್ಯರ್ಥಿಗಳು ತರಬೇತಿಯನ್ನು ಮಧ್ಯದಲ್ಲಿ ಬಿಡುವುದಿಲ್ಲವೆಂದು ಒಂದು ವೇಳೆ ಬಿಟ್ಟರೆ ತರಭೇತಿ ಅವಧಿಯಲ್ಲಿ ಪಡೆದಿರುವ ಶಿಷ್ಯವೇತನವನ್ನು ಶೇ. 10 ರೂ.ಗಳ ಬಡ್ಡಿಯೊಂದಿಗೆ ಸರ್ಕಾರಕ್ಕೆ ಹಿಂದಿರುಗಿ ಕಟ್ಟುವುದಾಗಿ ಮುಚ್ಚಳಿಕೆ ಬರೆದು ಕೊಡಬೇಕು. ಈ ನಿಯಮವು ರಾಜ್ಯ ಅಥವಾ ಕೇಂದ್ರ ಸರ್ಕಾರದಲ್ಲಿ ನೌಕರಿ ಪಡೆದರೆ ಅನ್ವಯಿಸುವುದಿಲ್ಲ.
8. ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಮಾಹಿತಿ ಹಾಗೂ ಸುಳ್ಳು ದಾಖಲಾತಿಯನ್ನು ನೀಡಿ ಆಯ್ಕೆಯಾಗಿ ಶಿಷ್ಯವೇತನ ಪಡೆದರೆ ಅಂತಹ ಅಭ್ಯರ್ಥಿಗಳು ತರಬೇತಿಯ ಅವಧಿಯಲ್ಲಿ ಪಡೆದ ಶಿಷ್ಯವೇತನವನ್ನು ಒಟ್ಟಿಗೆ ಶೇ. 10 ರೂ.ಗಳ ಬಡ್ಡಿಯೊಂದಿಗೆ ಸರ್ಕಾರಕ್ಕೆ ಹಿಂದಿರುಗಿ ಕಟ್ಟಬೇಕು. ತಪ್ಪಿದರೆ ಭೂ ಕಂದಾಯ ಬಾಕಿ ವಸೂಲಿಯಂತೆ ವಸೂಲಿ ಮಾಡಲಾಗುವುದು.
9. ಆಯ್ಕೆಯಾದ ಅಭ್ಯರ್ಥಿಯು ನಿಗಧಿತ ದಿನಾಂಕದ ಒಳಗೆ ತರಬೇತಿಗೆ ಹಾಜರಾಗದಿದ್ದರೆ ಅಂತಹವರ ಆಯ್ಕೆಯನ್ನು ರದ್ದುಪಡಿಸಲಾಗುವುದು.
10. ಸಂದರ್ಶನ ನಡೆಸುವ ಸ್ಥಳ ಮತ್ತು ದಿನಾಂಕವನ್ನು ಅಂಚೆ ಮೂಲಕ ತಿಳಿಸಲಾಗುವುದು.

ಪಿ. ಆರ್. 1124 ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿ, ಚಿತ್ರದುರ್ಗ.

## ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ

## ಪ್ರಕಟಣೆ

**ಪ್ರಕರಣ ಸಂಖ್ಯೆ: ಕಾಅಕೊ: ಕಾನಪ: 91: 2003, ದಿನಾಂಕ: 22ನೇ ಸೆಪ್ಟೆಂಬರ್, 2003**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1. ಶ್ರೀಮತಿ ನಿರ್ಮಲಾ, ಗಂಡ: ಅಶೋಕ ದಿವಟರ<br>ಸಾ: ಸಂಗನಾಳ, ತಾ: ಯಲಬುರ್ಗಾ<br>2. ಚಂದ್ರು, ತಂದೆ ಅಶೋಕ<br>3. ಜೋತೆಪ್ಪ ತಂದೆ ಕಳಕಪ್ಪ ದಿವಟರ<br>4. ಶ್ರೀಮತಿ ಗಂಗಮ್ಮ ಗಂಡ ಜೊತೆಪ್ಪ ದಿವಟರ<br>ಸಾ: ಸಂಗನಾಳ, ತಾ: ಯಲಬುರ್ಗಾ | | 1. ಬಸವ ಲಿಂಗಪ್ಪ<br>ತಂದೆ ಕೊಂಡೆಪ್ಪ ಹೊಸಂಗಡಿ.<br>ಸಾ: ಸಂಗನಾಳ, ತಾ: ಯಲಬುರ್ಗಾ,<br>ಜಿಲ್ಲಾ: ಕೊಪ್ಪಳ. |

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ **ಶ್ರೀ ಅಶೋಕ ದಿವಟರ** ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ: 8-3-2003ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೃತ **ಅಶೋಕ** ರಾದ ಶ್ರೀಮತಿ ನಿರ್ಮಲಾ-ಗಂಡ ಅಶೋಕ ಹಾಗೂ ಇತರರು ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ. ಆರ್. 1125 ಕೊಪ್ಪಳ ಜಿಲ್ಲೆ, ಕೊಪ್ಪಳ.

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಪ್ಪಳರವರಲ್ಲಿ

### ಪ್ರಕಟಣೆ

**ಪ್ರಕರಣ ಸಂಖ್ಯೆ: ಕಾಅಕೊ: ಕಾನಪ: ಸಿಆರ್-ಮಪ್ರ 91/ 2003, ದಿನಾಂಕ: 23ನೇ ಸೆಪ್ಟೆಂಬರ್, 2003**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಶ್ರೀ ಕಡ್ಲೆ ಬಸಪ್ಪ -ತಂದೆ ಷಣ್ಮುಖ ಗೌಡ | | 1. ಶ್ರೀಮತಿ ಎಂ. ಜಿ. ಮಾಲಾ-ಗಂಡ ಲೋಕೇಶ್, |
| ಸಾ: ಮುನಿರಾಬಾದ್, ತಾ: ಕೊಪ್ಪಳ. | | ಸೊಂಡೂರ, ತಾ: ಬಳ್ಳಾರಿ ಜಿಲ್ಲೆ, |
| | | 2. ದಿ ಬ್ರ್ಯಾಂಚ್ ಮ್ಯಾನೇಜರ್, ನ್ಯಾಷನಲ್ ಇನ್ಸೂರನ್ಸ್ ಕಂ. ಲಿ. ಬಳ್ಳಾರಿ. |

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ **ಶ್ರೀ ಷಣ್ಮುಖ ಗೌಡ** ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ: 31-7-2003ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತ ಹೆಂಡತಿಯಾದ ಶ್ರೀ ಕಡ್ಲೆಬಸಪ್ಪ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಏನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿ ಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿನದಲ್ಲಿ ಯಾವುದು ಮೊದಲು ಅದರೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದು.

ಪಿ. ಆರ್. 1126 ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

## ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ

### ಪ್ರಕಟಣೆ

**ಪ್ರಕರಣ ಸಂಖ್ಯೆ: ಕಾಅಕೊ: ಕಾನಪ: ಮಪ್ರ 91: 2003, ದಿನಾಂಕ: 22ನೇ ಸೆಪ್ಟೆಂಬರ್, 2003**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಶ್ರೀಮತಿ ಕವಿತಾ ಗಂಡ -ಈರಣ್ಣ ಕಡುಬಿನ | | 1. ರಾಮಣ್ಣ ತಂದೆ ದೇವೆಂದ್ರಪ್ಪ ಕಾಂಬಳಿ |
| 2. ಉದಯ ಕುಮಾರ ತಂದೆ ಈರಣ್ಣಾ ಕಡುಬಿನ | | ಸಾ: ಬಿನ್ನಾಳ, ತಾ: ಯಲಬುರ್ಗಾ |
| 3. ವಿಜಯಶ್ರೀ ತಂದೆ ಈರಣ್ಣ ಕಡುಬಿನ | | 2. ದಿ. ಡಿವಿಜನಲ್ ಮ್ಯಾನೇಜರ್, |
| 4. ಸಾ: ಬಿನ್ನಾಳ, ತಾ: ಯಲಬುರ್ಗಾ, ಜಿ: ಕೊಪ್ಪಳ. | | ದಿ ನ್ಯೂ ಇಂಡಿಯಾ, ಅಶ್ಯೂರೆನ್ಸ್ ಕಂ. ಲಿ. ಬಳ್ಳಾರಿ. |

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ **ಶ್ರೀ ಈರಣ್ಣ ತಂದೆ ಷಣ್ಮುಕಪ್ಪ** ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ: 3-2-2002ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೃತ ಹೆಂಡತಿ ಹಾಗೂ ಮಕ್ಕಳಾದ ಶ್ರೀ: ಶ್ರೀಮತಿ ಕವಿತಾ ಗಂಡ ಈರಣ್ಣಾ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ. ಆರ್. 1127 ಕೊಪ್ಪಳ ಜಿಲ್ಲೆ, ಕೊಪ್ಪಳ.

## IN THE COURT OF REGISTRAR OF COOPERATIVES
**No. 1, Ali Asker Road, Bangalore- 560 052.**
**No. RCS DIS SOU D4, 872/ 2003-2004**

| PETITIONER | | RESPONDENTS |
|---|---|---|
| Managing Director | V/s | 1. Sree Deepak Ram Das |
| Sirsi Urban Souharda Sahakari | | Honnavar, Ayappa Nagar, Post Hubli Road, Taluk Sirsi |
| Bank Ltd. | | 2. Smt. Saraswathi |
| | | Vithal Naik, Ayappa Nagar, Post Hubli Road, |
| | | 3. Ravindranath Ramdas |
| | | Honnawar, "Gayatri", Near Microwave Station, |
| | | Marikambanagar, Sirsi. |

**Notice of Attachment of immovable properties under section 44 (1) of the Karnataka Souharda Sahakari Act 1997.**

Whereas the Petitioner Bank has filed the above dispute before me U/s 39 (1) of the Karnataka Souharda Sahakari Act 1997 for recovery of a sum of Rs. 6, 19,101/- along with future interest from the Respondents. The dispute is taken on file under Dispute No. RCS DIS SOU D4. 872/ 2003-2004.

Along with the dispute the petitioner Bank has filed an application along with an affidavit U/S 44 (1) of Karnataka Souhardha Sahakari Act 1997 for attachment of properties belonging to the Respondents before judgement.

The dispute is taken on file and on hearing the petitioners arguments on the application U/S 44(1) of Karnataka Souhardha Sahakari Act 1997 wherein it is brought to my notice by the Petitioner Bank that the Respondents are contemplating to convey or alienate or dispose of the immovable properties belonging to the Respondents mentioned in the Schedule hereunder, with the intent to delay the enforcement or execution of any award or order that may be passed in the above dispute against them.

Whereas the Petitioner Bank has further stated that if the Respondents are not prevented from doing so, the petitioner Bank will be left with no means to recover the amount even if any award/ decree is obtained against the Respondents.

Whereas, I am fully convinced that the disposal of Schedule Property of the Respondents would defeat or delay the enforcement of execution of any order / decree that may be passed against the Respondents.

Hence, I pass the following order.

**ORDER**

Under the circumstances explained above and in exercise of powers vested in me under section 44 (1) of the Karnataka Souhardha Sahakari Act 1997, I Siddhaiah, I.A.S. Registrar of co-operatives in Karnataka, Bangalore do hereby order the conditional attachment of the immovable properties of the Respondents as mentioned in the Schedule hereunder before judgement in the above case.

Notice is hereby given to the Respondents that if they desire to have the conditional attachment raised, they should furnish cash security to the extent of Rs. 6.20 lakhs by depositing the said amount in the petitioner's Bank, under suspense Account and produce the original receipt/ challan issued thereon to this office on or before 25-10-2003 without fail.

If they fail to furnish the cash security as ordered above within the stipulated period, this conditional attachment will be confirmed as made absolute.

Notice is also hereby given to persons purchasing or acquiring the properties mentioned in the Schedule hereunder that they will do so subject to this attachment.

**SCHEDULE OF PROPERTY BELONGING TO 1st RESPONDENT**

| Taluka | Grama | Survey No. | Dimension | Type of Land |
|---|---|---|---|---|
| Sirsi | Narabile | 30 | 9.00.00 | Cultivating land |
| Sirsi | Sirsi | 278/1/B Plot No. 23 | 0.02.02 | - |

Given under my hand and seal on this day the 20th September 2003.

**SIDDIAH, I. A. S.**

P. R. 1128 Registrar of Cooperatives In Karnataka.

**ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಬಸವನಬಾಗೇವಾಡಿ**

**ಅಧಿಸೂಚನೆ ಸಂಖ್ಯೆ: ತಾಸಕಅ: ಆಡಳಿತ: ಸಿಆರ್: 2003-04/432 (D), ದಿನಾಂಕ: 29ನೇ ಸೆಪ್ಟೆಂಬರ್, 2003**

**ವಿಷಯ:** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002 ರ ಅನುಷ್ಠಾನದ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ-56, ಯೋಮಸ-02 (1), ದಿನಾಂಕ: 18-7-2002.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2 (ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ, ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ, ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|
| ತಾಲ್ಲೂಕು ಮಟ್ಟದಲ್ಲಿ | ಕಛೇರಿ ಅಧೀಕ್ಷಕರು | ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು |

ಸರ್ಕಾರದ ಅಧಿನಿಯಮದ ಸೆಕ್ಷನ್ 3 (ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ, ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1) ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:-**

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯು ತಾಲ್ಲೂಕು ಪಂಚಾಯತ್‌ನ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಸದರಿ ಕಚೇರಿಯಲ್ಲಿ ಈ ಕೆಳಗಿನಂತೆ ಪೂರಕ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

| | | |
|---|---|---|
| 1) | ಕಚೇರಿ ಅಧೀಕ್ಷಕರು | 1 ಹುದ್ದೆ |
| 2) | ಪ್ರಥಮ ದರ್ಜೆ ಸಹಾಯಕರು | 1 ಹುದ್ದೆ |
| 3) | ದ್ವಿತೀಯ ದರ್ಜೆ ಸಹಾಯಕರು | 1 ಹುದ್ದೆ |
| 4) | ಬೆರಳಚ್ಚುಗಾರರು | 1 ಹುದ್ದೆ |
| 5) | ಗ್ರೂಪ್ 'ಡಿ' ನೌಕರರು | 1 ಹುದ್ದೆ |

ಇಲ್ಲಿ ನಮ್ಮ ಅಧೀನದಡಿಯಲ್ಲಿ ಬರುವ ಎಲ್ಲಾ ಸಂಸ್ಥೆಗಳ ಹೆಸರು ಮತ್ತು ವಿವರಗಳು ಈ ಕೆಳಗಿನಂತೆ ಇರುತ್ತವೆ.

| ಕ್ರ.ಸಂ | ಸಂಸ್ಥೆ ಹೆಸರು | ಗ್ರಾಮ | ಮಂಜೂರಿ ಸಂಖ್ಯೆ |
|---|---|---|---|
| 1. | ಸರಕಾರಿ ಮೆಟ್ರಿಕ್ ಪೂರ್ವ ಬಾಲಕಿಯರ ವಸತಿ ನಿಲಯ, ಬಸವನಬಾಗೇವಾಡಿ | ಬಸವನಬಾಗೇವಾಡಿ | 50 |
| 2. | ಸರಕಾರಿ ಮೆಟ್ರಿಕ್‌ಪೂರ್ವ ಬಾಲಕರ ವಸತಿನಿಲಯ ಬಸವನಬಾಗೇವಾಡಿ | ಬಸವನಬಾಗೇವಾಡಿ | 50 |
| 3. | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿನಿಲಯ ಕುದುರೆ ಸಾಲವಾಡಗಿ, ತಾ: ಬಸವನಬಾಗೇವಾಡಿ | ಕೆ. ಸಾಲವಾಡಗಿ | 50 |
| 4. | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ ವಡವಡಗಿ, ತಾ: ಬಸವನಬಾಗೇವಾಡಿ | ವಡವಡಗಿ | 50 |
| 5. | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ ತೆಲಗಿ, ತಾ: ಬಸವನಬಾಗೇವಾಡಿ | ತೆಲಗಿ | 50 |
| 6. | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ ಜಾಯವಾಡಗಿ, ತಾ: ಬಸವನಬಾಗೇವಾಡಿ | ಜಾಯವಾಡಗಿ | 50 |
| 7. | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ ಹೆಬ್ಬಾಳ, ತಾ: ಬಸವನಬಾಗೇವಾಡಿ | ಹೆಬ್ಬಾಳ | 50 |
| 8. | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ ನರಸಲಗಿ, ತಾ: ಬಸವನಬಾಗೇವಾಡಿ | ನರಸಲಗಿ | 50 |
| 9. | ಸರಕಾರಿ ಆಶ್ರಮ ಶಾಲೆ, ಕೆ. ಸಾಲವಾಡಗಿ | ಕೆ. ಸಾಲವಾಡಗಿ | 25 |
| 10. | ಸರಕಾರಿ ಆಶ್ರಮ ಶಾಲೆ, ಹೂವಿನ ಹಿಪ್ಪರಗಿ (ಪ. ವರ್ಗ) | ಹೂವಿನಹಿಪ್ಪರಗಿ | 75 |

ಬಸವನಬಾಗೇವಾಡಿ ತಾಲ್ಲೂಕಿನಲ್ಲಿರುವ ಸಮಾಜ ಕಲ್ಯಾಣ ಇಲಾಖೆ ಅನುದಾನಿತ ಹಾಸ್ಟೆಲ್‌ನ ವಿವರ ಈ ಕೆಳಗಿನಂತಿರುತ್ತದೆ.

| ಕ್ರ.ಸಂ | ಸಂಸ್ಥೆ ಹೆಸರು | ಗ್ರಾಮ | ಮಂಜೂರಿ ಸಂಖ್ಯೆ | ಷರಾ |
|---|---|---|---|---|
| 1. | ಶ್ರೀ ಶಾಖಾಂಬರಿ ಉಚಿತ ಪ್ರಸಾದ ನಿಲಯ, ವಂದಾಲ, ತಾ: ಬಸವನಬಾಗೇವಾಡಿ | ವಂದಾಲ | 55 | ಅನುದಾನಕ್ಕೆ ಒಳಪಟ್ಟಿರುತ್ತದೆ ಸ್ವಂತ ಕಟ್ಟಡ ಇದೆ. |
| 2. | ಶ್ರೀ ಮಡಿವಾಳೇಶ್ವರ ಉಚಿತ ಪ್ರಸಾದ ನಿಲಯ, ಕಣಕಾಲ ತಾ: ಬಸವನಬಾಗೇವಾಡಿ | ಕಣಕಾಲ | 50 | -ಸದರ- |
| 3. | ಶ್ರೀ ಬಸವೇಶ್ವರ ಉಚಿತ ಪ್ರಸಾದ ನಿಲಯ, ಉಕ್ಕಲಿ, ತಾ: ಬಸವನಬಾಗೇವಾಡಿ | ಉಕ್ಕಲಿ | 35 | -ಸದರ- |
| 4. | ಶ್ರೀ ಎಸ್. ಎಸ್. ಮುತ್ಯಾನವರ ಉಚಿತ ಪ್ರಸಾದ ನಿಲಯ, ಜಯವಾಡಗಿ | ಜಯವಾಡಗಿ | 23 | -ಸದರ- |
| 5. | ಈ ಬಿ. ಎಲ್. ಹಾಸ್ಟೆಲ್, ಗೊಳಸಂಗಿ | ಗೊಳಸಂಗಿ | 20 | -ಸದರ- |

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನ ಗೊಳಿಸಲಾಗುತ್ತಿದೆ.

1. ಕಾನೂನು ಪದವೀಧರರಿಗೆ ಧನಸಹಾಯ
2. ಕಟ್ಟಡಗಳ ನಿರ್ವಹಣೆ
3. ಪ.ಜಾತಿ: ಪ.ವರ್ಗದ ವಿದ್ಯಾರ್ಥಿಗಳಿಗೆ 1 ರಿಂದ 4ನೇ ತರಗತಿಯಲ್ಲಿ ಓದುತ್ತಿರುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಮಂಜೂರಿ.
4. ಪ.ಜಾತಿ: ಪ.ವರ್ಗದ ವಿದ್ಯಾರ್ಥಿಗಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನಗಳು (5 ರಿಂದ 7 ಮತ್ತು 8 ರಿಂದ 10ನೇ ತರಗತಿ).
5. ಪ್ರತಿಭಾ ವಿದ್ಯಾರ್ಥಿವೇತನ
6. ಪ. ಜಾತಿ: ಪ. ವರ್ಗದ ವಿದ್ಯಾರ್ಥಿಗಳಿಗೆ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ಮಂಜೂರಿ (ಸಿ.ಎಸ್.ಎಸ್.)
7. ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಸಹಾಯ ಮಂಜೂರಿ.

